

# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 641 |
| ಸದಸ್ಯರ ಹೆಸರು | : | ಶ್ರೀ ಐವನ್ ಡಿ ಸೋಜಾ |
| ಉತ್ತರಿಸಬೇಕಾದ ದಿನಾಂಕ | : | 11.03.2020 |
| ಉತ್ತರಿಸಬೇಕಾದ ಸಚಿವರು | : | ಸಮಾಜ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಒಟ್ಟು ಎಷ್ಟು ಕೊರಗ ಕುಟುಂಬಗಳಿವೆ; ಗಿರಿಜನ ಅಭಿವೃದ್ಧಿ ಯೋಜನೆ ಅನ್ವಯ ಯಾವ ಯೋಜನೆಗಳನ್ನು ಕೊರಗ ಕುಟುಂಬಗಳಿಗೆ ನೀಡಲಾಗುತ್ತಿದೆ; (ವಿವರ ನೀಡುವುದು) | 2011ರ ಜನಗಣತಿ ಪ್ರಕಾರ ರಾಜ್ಯದಲ್ಲಿ ಮೂಲನಿವಾಸಿ ಬುಡಕಟ್ಟು ಸಮುದಾಯವಾದ ಕೊರಗ ಜನಾಂಗದ 14774 ಕುಟುಂಬಗಳಿವೆ. ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆಯಡಿ. ಕೊರಗ ಸಮುದಾಯದವರ ಅಭಿವೃದ್ಧಿಗಾಗಿ ಈ ಕೆಳಗಿನ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>1) ಮನೆ ನಿರ್ಮಾಣ ಯೋಜನೆ:- ಕೊರಗ ಸಮುದಾಯದವರಿಗೆ ರೂ. 3.50 ಲಕ್ಷ ಘಟಕ ವೆಚ್ಚದಲ್ಲಿ ಮನೆ ನಿರ್ಮಾಣ ಯೋಜನೆಯನ್ನು ಕೈಗೊಳ್ಳಲಾಗುತ್ತಿದೆ.<br><br>2) ಪೌಷ್ಟಿಕ ಆಹಾರ ಯೋಜನೆ:- ಈ ಯೋಜನೆಯಡಿ ಮಳೆಗಾಲದ ಅವಧಿಯಲ್ಲಿ ಅಂದರೆ ಜೂನ್‌ನಿಂದ ಡಿಸೆಂಬರ್‌ವರೆಗೆ 45 ದಿನಗಳಿಗೊಮ್ಮೆ ಪೌಷ್ಠಿಕ ಆಹಾರ ಸಾಮಗ್ರಿಗಳನ್ನು ಪೂರೈಸುವ ಕಾರ್ಯಕ್ರಮ ಅನುಷ್ಠಾನಗೊಳಿಸಲಾಗುತ್ತಿದೆ. ಸದರಿ ಯೋಜನೆಯಲ್ಲಿ ಅಕ್ಕಿ-8ಕೆಜಿ ತೊಗರಿಬೇಳೆ-3ಕೆಜಿ, ಹೆಸರುಕಾಳು-1ಕೆಜಿ, ಕಡಲೇಕಾಳು-1ಕೆಜಿ, ಕಡಲೇಬೀಜ-1ಕೆಜಿ,ಅಲಸದಂದೆಕಾಳು-1ಕೆಜಿ, ಹುರಳಿಕಾಳು-1ಕೆಜಿ, ಬೆಲ್ಲ/ಸಕ್ಕರೆ-1ಕೆಜಿ. ಅಡುಗೆಎಣ್ಣೆ:-1ಲೀಟರ್, ಮೊಟ್ಟೆ-30 ನಂಬರ್ ನಂದಿನಿ ತುಪ್ಪ 1/2ಕೆಜಿ ನೀಡಲಾಗುತ್ತಿದೆ.<br><br>3) ಶೈಕ್ಷಣಿಕ ಪ್ರೋತ್ಸಾಹಧನ: ಕೊರಗ ಸಮುದಾಯದ ಎಸ್.ಎಸ್.ಎಲ್.ಸಿ ಮತ್ತು ನಂತರದ ಕೋರ್ಸುಗಳನ್ನು ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ಯಶಸ್ವಿಯಾಗಿ ಪೂರೈಸಲು ಪ್ರೋತ್ಸಾಹಧನವನ್ನುಈ ಕೆಳಗಿನಂತೆ ವರ್ಷದಲ್ಲಿ 2 ಬಾರಿ ನೀಡಲಾಗುತ್ತಿದೆ.<br><br>1 \| ಎಸ್.ಎಸ್.ಎಲ್.ಸಿ \| 10,000<br>2 \| ಪಿ.ಯು.ಸಿ ಮತ್ತು ತತ್ಸಮಾನ ಕೋರ್ಸುಗಳು (ಪ್ರತಿ ವರ್ಷಕ್ಕೆ) \| 12,000<br>3 \| ಎಲ್ಲಾ ಪದವಿ ಕೋರ್ಸುಗಳು (ಪ್ರತಿ ವರ್ಷಕ್ಕೆ) \| 15,000<br>4 \| ಎಲ್ಲಾ ಸ್ನಾತಕೋತ್ತರ ಕೋರ್ಸುಗಳು (ಪ್ರತಿ ವರ್ಷಕ್ಕೆ) \| 18,000 |

| | | |
|---|---|---|
| ಆ | ಕೊರಗ ಕುಟುಂಬಗಳು ಮತ್ತು ಸಂತತಿ ನಶಿಸಿ ಹೋಗುತ್ತಿದ್ದು, ಆ ಕುಟುಂಬಗಳಲ್ಲಿ ಪಡೆಯುತ್ತಿರುವ ಶಿಕ್ಷಣದ ಬಗ್ಗೆ ಮತ್ತು ಉದ್ಯೋಗ ಒದಗಿಸುವ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು; (ಜಿಲ್ಲಾವಾರು ವಿವರ ನೀಡುವುದು) | ಕೊರಗ ಸಮುದಾಯದವರು ಹೆಚ್ಚಿನ ಮಧ್ಯ ಸೇವನೆಯಿಂದಾಗಿ ಮರಣ ಹೊಂದುತ್ತಿದ್ದು, ಮರಣ ಪ್ರಮಾಣವನ್ನು ಕಡಿಮೆ ಮಾಡಲು ಮಧ್ಯವರ್ಜನ ಶಿಬಿರಗಳನ್ನು ನಡೆಸಲಾಗುತ್ತಿದ್ದು, ವಿದ್ಯಾವಂತ ಕೊರಗ ನಿರುದ್ಯೋಗಿಗಳಿಗೆ ಕೌಶಲ್ಯಾಭಿವೃದ್ಧಿ ತರಬೇತಿ, ಉದ್ಯೋಗ ಮೇಳಗಳನ್ನು ನಡೆಸಲಾಗಿದೆ ಹಾಗೂ ಸಮುದಾಯದ ವಿದ್ಯಾರ್ಥಿಗಳಿಗೆ ಆಶ್ರಮ ಶಾಲೆ, ವಿದ್ಯಾರ್ಥಿನಿಲಯ ಮತ್ತು ಮೊರಾರ್ಜಿ ದೇಸಾಯಿ ವಸತಿ ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣ, ವಸತಿ, ಊಟ, ಸಮವಸ್ತ್ರ, ಲೇಖನ ಸಾಮಾಗ್ರಿ ಇತ್ಯಾದಿ ಶಿಕ್ಷಣ ಸವಲತ್ತುಗಳನ್ನು ಒದಗಿಸಲಾಗುತ್ತಿದೆ. ಕೊರಗ ಸಮುದಾಯದ ಎಸ್.ಎಸ್.ಎಲ್.ಸಿ ಮತ್ತು ನಂತರದ ಕೋರ್ಸುಗಳನ್ನು ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ಯಶಸ್ವಿಯಾಗಿ ಪೂರೈಸಲು ಪ್ರೋತ್ಸಾಹ ಧನವನ್ನು ವರ್ಷದಲ್ಲಿ 2 ಬಾರಿ ನೀಡಲಾಗುತ್ತಿದೆ. 2019-20ನೇ ಸಾಲಿನಲ್ಲಿ 117 ವಿದ್ಯಾರ್ಥಿಗಳಿಗೆ 14.44 ಲಕ್ಷ ವೆಚ್ಚ ಭರಿಸಲಾಗಿದೆ. |
| ಇ | 10ನೇತರಗತಿಯಿಂದ ಪದವಿಪೂರ್ವ ಮತ್ತು ಪದವಿ ವ್ಯಾಸಂಗ ಮಾಡಿದ ಕೊರಗ ಕುಟುಂಬದ ವಿವರ ನೀಡುವುದು; | 7 ಮತ್ತು 10ನೇ ತರಗತಿಯಲ್ಲಿ ಉತ್ತೀರ್ಣರಾದ ಕೊರಗ ವಿದ್ಯಾರ್ಥಿಗಳಿಗೆ ಕ್ರಮವಾಗಿ ರೂ. 2500.00 ಮತ್ತು ರೂ. 5000.00 ಪ್ರೋತ್ಸಾಹ ಧನ ನೀಡಲಾಗುತ್ತಿದೆ. ಅದರಂತೆ 2019-20ನೇ ಸಾಲಿನಲ್ಲಿ ಕ್ರಮವಾಗಿ 23 ಮತ್ತು 21 ವಿದ್ಯಾರ್ಥಿಗಳಿಗೆ ಒಟ್ಟು 1.05 ಲಕ್ಷ ವೆಚ್ಚ ಭರಿಸಲಾಗಿದೆ. ಅಲ್ಲದೆ ಕೊರಗ ಸಮುದಾಯದ ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ಯಶಸ್ವಿಯಾಗಿ ಪೂರೈಸಲು ವಿದ್ಯಾರ್ಥಿ ವೇತನವನ್ನು ನೀಡಲಾಗುತ್ತಿದೆ.<br><br>ಉಡುಪಿ ಮತ್ತು ದಕ್ಷಿಣಕನ್ನಡ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೊರಗ ಸಮುದಾಯದವರಿದ್ದು, 10ನೇ ತರಗತಿಯಿಂದ ಪದವಿ ಪೂರ್ವ ಮತ್ತು ಪದವಿ ವ್ಯಾಸಂಗ ಮಾಡಿದ ಕೊರಗ ಕುಟುಂಬದ ವಿವರ ಈ ಕೆಳಗಿನಂತಿದೆ. |

| ಕ್ರ. ಸಂ | ತಾಲೂಕು | ಎಸ್.ಎಸ್.ಎಲ್.ಸಿ | ಪಿ.ಯು.ಸಿ | ಪದವಿ | ಸ್ನಾತಕೋತರ | ಒಟ್ಟು |
|---|---|---|---|---|---|---|
| | | | **ದಕ್ಷಿಣಕನ್ನಡ** | | | |
| 1 | ಮಂಗಳೂರು | 33 | 41 | 21 | 8 | 103 |
| 2 | ಬಂಟ್ವಾಳ | 14 | 1 | 0 | 0 | 15 |
| 3 | ಪುತ್ತೂರು | 06 | 4 | 0 | 0 | 11 |
| 4 | ಬೆಳ್ತಂಗಡಿ | 05 | 9 | 4 | 1 | 19 |
| 5 | ಸುಳ್ಯ | 02 | 0 | 0 | 0 | 2 |
| | **ಒಟ್ಟು** | **60** | **55** | **25** | **9** | **150** |
| | | | **ಉಡುಪಿ** | | | |
| 1 | ಉಡುಪಿ | 28 | 21 | 16 | 8 | 73 |
| 2 | ಕುಂದಾಪುರ | 17 | 11 | 11 | 3 | 42 |
| 3 | ಕಾರ್ಕಳ | 3 | 11 | 11 | 12 | 26 |
| | **ಒಟ್ಟು** | **48** | **43** | **38** | **23** | **141** |

| | | |
|---|---|---|
| ಈ | ಕೊರಗ ಮಕ್ಕಳಿಗೆ ಉದ್ಯೋಗ ಒದಗಿಸಲು ಸರ್ಕಾರದ ಮುಂದಿರುವ ವಿಶೇಷ ಯೋಜನೆಗಳು ಯಾವುವು; ಇದ್ದರೆ, ವಿವರ ನೀಡುವುದು; ಕೊರಗ ಸಮಾಜದ ಜನ ಜೀವನದ ಬಗ್ಗೆ ವರದಿ ಪಡೆಯಲಾಗಿದೆಯೇ? (ವಿವರ ನೀಡುವುದು) | ಪರಿಶಿಷ್ಟ ಪಂಗಡದ ಜನರ ಸಲುವಾಗಿ ಇರುವ ಎಲ್ಲಾ ಕಾರ್ಯಕ್ರಮಗಳನ್ನು ಕೊರಗ ಸಮುದಾಯದ ಎಲ್ಲಾ ಮಕ್ಕಳಿಗೂ ವಿಸ್ತರಿಸಲಾಗಿರುತ್ತದೆ. ಪರಿಶಿಷ್ಟ ಪಂಗಡದ ಮಕ್ಕಳಿಗೆ ಉದ್ಯೋಗ ಒದಗಿಸಲು ಐ.ಎ.ಎಸ್ ಮತ್ತು ಕೆ.ಎ.ಎಸ್, ನರ್ಸಿಂಗ್, ಪ್ಯಾರಮೆಡಿಕಲ್, ಬ್ಯಾಂಕಿಂಗ್ ಮತ್ತು ಗ್ರೂಪ್ "ಸಿ" ಹುದ್ದೆಗಳಿಗೆ ಪರೀಕ್ಷಾಪೂರ್ವ ತರಬೇತಿ ಕೇಂದ್ರದ ಮೂಲಕ, ತರಬೇತಿ ಕಾರ್ಯಕ್ರಮಗಳನ್ನು ಹಾಗೂ ಕೊರಗ ಯುವಕ/ಯುವತಿಯರಿಗೆ ಉದ್ಯೋಗ ಒದಗಿಸಲು ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>1) ಚಾಲನ ಪರವಾನಗಿ ಹೊಂದಿರುವ ನಿರುದ್ಯೋಗಿ ಯುವಕರಿಗೆ ಗೂಡ್ಸ್ ವಾಹನ ಖರೀದಿಸಲು ಗರಿಷ್ಠ ರೂ. 4 ಲಕ್ಷ ಅಥವಾ ಶೇ. 50 ರಷ್ಟು ಸಹಾಯಧನ ನೀಡಲಾಗುವುದು.<br><br>2) ಮಹಿಳೆಯರಿಗಾಗಿ ಹೈನುಗಾರಿಕೆ, ಕುರಿ ಮತ್ತು ಮೇಕೆ ಘಟಕ, ಹಂದಿ ಸಾಕಾಣಿಕೆ ಘಟಕಗಳನ್ನು ಗರಿಷ್ಠ ಶೇ.90 ರಷ್ಟು ಸಹಾಯಧನದಲ್ಲಿ ನೀಡಲಾಗುತ್ತಿದೆ.<br><br>3) ಸ್ವಯಂ ಉದ್ಯೋಗ / ಉದ್ಯಮಶೀಲತಾ ಅಭಿವೃದ್ಧಿ ಯೋಜನೆ:- ಪರಿಶಿಷ್ಟ ಪಂಗಡದ ನಿರುದ್ಯೋಗಿ ಯುವಕ ಯುವತಿಯರಿಗೆ ಸ್ವಯಂ ಉದ್ಯೋಗ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ರೂ.5.00 ಲಕ್ಷದವರೆಗೆ ಆರ್ಥಿಕ ನೆರವನ್ನು ಕಲ್ಪಿಸಲಾಗುತ್ತಿದೆ.<br><br>4) ಭೂ ಒಡೆತನ ಯೋಜನೆ:- ಪರಿಶಿಷ್ಟ ಪಂಗಡಕ್ಕೆ ಸೇರಿದ ಭೂ ರಹಿತ ಮಹಿಳಾ ಕೃಷಿ ಕಾರ್ಮಿಕ ಕುಟುಂಬಗಳನ್ನು ಘಟಕ ವೆಚ್ಚ ರೂ.15.00 ಲಕ್ಷ ಮಿತಿಯಲ್ಲಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿರದ ಭೂ ಮಾಲೀಕರಿಂದ ಕೃಷಿ ಜಮೀನನ್ನು ಖರೀದಿಸಿ ಫಲಾನುಭವಿಗಳ ಹೆಸರಿಗೆ ನೇರವಾಗಿ ನೊಂದಣಿ ಮಾಡಿಸುವ ಮೂಲಕ ಭೂ ಒಡೆಯರನ್ನಾಗಿಸಲಾಗುತ್ತಿದೆ.<br><br>5) ಸಮಗ್ರ ಗಂಗಾ ಕಲ್ಯಾಣ ಯೋಜನೆ:- ಪರಿಶಿಷ್ಟ ಪಂಗಡದ ಸಣ್ಣ ಮತ್ತು ಅತಿ ಸಣ್ಣ ರೈತರು ಹೊಂದಿರುವ ಕೃಷಿ ಜಮೀನಿಗೆ ಈ ಯೋಜನೆಯಡಿ ನೀರಾವರಿ ಸೌಲಭ್ಯ ಕಲ್ಪಿಸಲಾಗುತ್ತಿದೆ.<br><br>6) ಪ್ರೇರಣಾ ಯೋಜನೆ (ಮೈಕ್ರೋ ಕ್ರೆಡಿಟ್ ಕಿರುಸಾಲ ಯೋಜನೆ):- ಈ ಯೋಜನೆಯಡಿ ಪರಿಶಿಷ್ಟ ಪಂಗಡದ ಮಹಿಳಾ ಸ್ವ ಸಹಾಯ ಸಂಘಗಳ ಸದಸ್ಯರು ಸ್ವಯಂ ಉದ್ಯೋಗ ಕೈಗೊಳ್ಳಲು ಉತ್ಪಾದನಾ / ಸೇವಾ ಚಟುವಟಿಕೆಗಳಿಗೆ ಆರ್ಥಿಕ ನೆರವನ್ನು ಒದಗಿಸಲಾಗುತ್ತಿದೆ. ಪ್ರತಿ ಪರಿಶಿಷ್ಟ ಪಂಗಡದ ಮಹಿಳಾ ಸದಸ್ಯರಿಗೆ ರೂ.25,000/- ಆರ್ಥಿಕ ನೆರವನ್ನು ನೀಡಲಾಗುತ್ತಿದ್ದು, ರೂ.15000/- ಸಹಾಯಧನ ಹಾಗೂ ರೂ.10,000/- ಅಂಚಿನಹಣವಾಗಿರುತ್ತದೆ.<br><br>7) ಐರಾವತ ಯೋಜನೆ:- ಈ ಯೋಜನೆಯಡಿ ಪರಿಶಿಷ್ಟ ಪಂಗಡದ ನಿರುದ್ಯೋಗಿ ಯುವಕ ಯುವತಿಯರಿಗೆ ಓಲಾ - ಊಬರ್ ಸಂಸ್ಥೆಯ ಸಹಯೋಗದಲ್ಲಿ ಟ್ಯಾಕ್ಸಿ ಸೌಲಭ್ಯ ಕಲ್ಪಿಸಲಾಗುತ್ತಿದ್ದು, ಪ್ರತಿ ಫಲಾನುಭವಿಗೆ ರೂ.5.00ಲಕ್ಷ ಸಹಾಯಧನವನ್ನು ನೀಡಲಾಗುತ್ತಿದೆ. |

| | | |
|---|---|---|
| | | 8) ಸಮೃದ್ಧಿ ಯೋಜನೆ:- ಪರಿಶಿಷ್ಟ ಪಂಗಡದ ಯುವಕ ಯುವತಿಯರು ಪ್ರತಿಷ್ಠಿತ ಬ್ರ್ಯಾಂಡೆಡ್ ಕಂಪನಿಗಳ ಸಹಭಾಗಿತ್ವದಲ್ಲಿ ಆದಾಯ ತರುವಂತಹ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ರೂ.10.00ಲಕ್ಷದವರೆಗೆ ಸಹಾಯಧವನ್ನು ಈ ಯೋಜನೆಯಡಿ ನೀಡಲಾಗುತ್ತಿದೆ.<br><br>9) ಆದಿವಾಸಿ ಜನಾಂಗದವರ ಅಭಿವೃದ್ಧಿಗಾಗಿ ತೋಟಗಾರಿಕೆ ಬೆಳೆಗಳು ಹಾಗೂ ನಿರ್ವಹಣೆ, ಕೃಷಿ ಅಭಿವೃದ್ಧಿ, ಕೋಳಿ ಸಾಕಾಣಿಕೆ, ಮೀನುಗಾರಿಕೆ, ಶೀಥಿಲ ಘಟಕ ಸ್ಥಾಪನೆ ಹಾಗೂ ಸಣ್ಣ ಹಿಡುವಳಿದಾರರಿಗೆ ಸಹಾಯಧನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>ಕೊರಗ ಸಮುದಾಯದ ಜನ ಜೀವನದ ಬಗ್ಗೆ ಕರ್ನಾಟಕ ರಾಜ್ಯ ಬುಡಕಟ್ಟು ಸಂಶೋಧನಾ ಸಂಸ್ಥೆಯ ವತಿಯಿಂದ ವರದಿ ಸಿದ್ಧಪಡಿಸುವ ಪ್ರಕ್ರಿಯೆಯು ಜಾರಿಯಲ್ಲಿರುತ್ತದೆ. |

ಸಕಇ 124 ಎಸ್‌ಟಿಪಿ 2020

(ಗೋವಿಂದ ಎಂ. ಕಾರಜೋಳ),
ಉಪ ಮುಖ್ಯ ಮಂತ್ರಿಗಳು
ಹಾಗೂ ಲೋಕೋಪಯೋಗಿ
ಮತ್ತು ಸಮಾಜ ಕಲ್ಯಾಣ ಸಚಿವರು.